# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| 1 | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : 1067 |
| 2 | ಸದಸ್ಯರ ಹೆಸರು | : ಶ್ರೀ ಮರಿತಿಬ್ಬೇಗೌಡ (ಶಿಕ್ಷಕರ ಕ್ಷೇತ್ರ) |
| 3 | ಉತ್ತರಿಸುವ ದಿನಾಂಕ | : 21-09-2021 |
| 4 | ಉತ್ತರಿಸುವವರು | : ಮುಖ್ಯಮಂತ್ರಿಗಳು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಯಲಹಂಕ, ಮಾರುತಿನಗರದ ಕೂರ್ಲಪ್ಪ ಬಡಾವಣೆಯ 7ನೇ ಅಡ್ಡರಸ್ತೆ ಹಾಗೂ ಬಡಾವಣೆಯ ಇನ್ನಿತರೆ ರಸ್ತೆಗಳಲ್ಲಿ ಸುಮಾರು 8 ತಿಂಗಳಿಗೂ ಮೇಲ್ಪಟ್ಟು ಕಾಂಕ್ರೀಟ್ ರಸ್ತೆ ಮಾಡಲು ರಸ್ತೆಗಳಿಗೆ ಜಲ್ಲಿಕಲ್ಲುಗಳನ್ನು ಹಾಗೂ ಕಂಬಿಗಳನ್ನು ಕಟ್ಟಿ ರಸ್ತೆ ಹಾಗೂ ಡಾಂಬರೀಕರಣ ಮಾಡದಿರುವುದರಿಂದ ಸಾರ್ವಜನಿಕರ ಓಡಾಟಕ್ಕೆ ತೊಂದರೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಕೂರ್ಲಪ್ಪ ಬಡಾವಣೆಯಲ್ಲಿ ಬರುವ ರಸ್ತೆಗಳನ್ನು "ಮುಖ್ಯಮಂತ್ರಿಗಳ ನವ ನಗರೋತ್ಥಾನ" ಯೋಜನೆಯಡಿಯಲ್ಲಿ ಕೆಲವು ರಸ್ತೆಗಳನ್ನು ಅಭಿವೃದ್ಧಿಪಡಿಸಲಾಗಿದ್ದು, 7ನೇ ಅಡ್ಡರಸ್ತೆ ಹಾಗೂ ಇತರೆ ಕೆಲವು ರಸ್ತೆಗಳಿಗೆ ಡಾಂಬರೀಕರಣ ಕಾಮಗಾರಿ ಕೈಗೊಳ್ಳಬೇಕಾಗಿದ್ದು, ಅನುದಾನದ ಕೊರತೆಯಿಂದ ಕಾಮಗಾರಿಯನ್ನು ನಿರ್ವಹಿಸಲು ಸಾಧ್ಯವಾಗಿರುವುದಿಲ್ಲ. ಪ್ರಸ್ತುತ ಬೆಂಗಳೂರು ಜಿಲ್ಲಾ ಉಸ್ತುವಾರಿ ಸಚಿವರ ಅನುದಾನದಡಿ ರೂ.100.00 ಲಕ್ಷಗಳ ಅನುದಾನ ಮಂಜೂರಾಗಿದ್ದು, ಸದರಿ ಅನುದಾನದಡಿ ಉಳಿದ ರಸ್ತೆಗಳ ಡಾಂಬರೀಕರಣ ಕಾಮಗಾರಿಯನ್ನು ಕೈಗೊಳ್ಳಲಾಗುವುದು. |
| ಆ | ಮೇಲ್ಕಂಡ ಸ್ಥಳದಲ್ಲಿ ಕಳೆದ ಒಂದು ವರ್ಷದಿಂದ ಕುಡಿಯುವ ನೀರಿನ ಸಮಸ್ಯೆಯನ್ನು ಬಗೆಹರಿಸದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಯಲಹಂಕ, ಮಾರುತಿನಗರದ ಕೂರ್ಲಪ್ಪ ಬಡಾವಣೆಯ 7ನೇ ಅಡ್ಡರಸ್ತೆ ಹಾಗೂ ಬಡಾವಣೆಯ ಇನ್ನಿತರೆ ರಸ್ತೆಗಳಲ್ಲಿ ಸುಮಾರು 100 ಮನೆಗಳಿದ್ದು, ಅವುಗಳ ಪೈಕಿ ಸುಮಾರು 60 ಮನೆಗಳಿಗೆ ಮಂಡಳಿಯ ನಿಯಮಾನುಸಾರ ನೀರು ಮತ್ತು ಒಳಚರಂಡಿ ಸಂಪರ್ಕವನ್ನು ಮಂಜೂರು ಮಾಡಲಾಗಿದ್ದು, ಸದರಿ ಮನೆಗಳಿಗೆ ಕಾವೇರಿ ನೀರನ್ನು 2021ರ ಸೆಪ್ಟೆಂಬರ್ 01 ರಿಂದ ಸರಬರಾಜು ಮಾಡಲಾಗುತ್ತಿದೆ. |
| ಇ | ಸದರಿ ಸಮಸ್ಯೆಗಳನ್ನು ಪರಿಹರಿಸುವಲ್ಲಿನ ವಿಳಂಬಕ್ಕೆ ಕಾರಣಗಳೇನು; | ಯಲಹಂಕ, ಮಾರುತಿನಗರದ ಕೂರ್ಲಪ್ಪ ಬಡಾವಣೆಯಲ್ಲಿ ಡಾಂಬರೀಕರಣಕ್ಕಾಗಿ ಬಾಕಿ ಇರುವ ಕೆಲವು ರಸ್ತೆಗಳ ಕಾಮಗಾರಿಗಳನ್ನು ಪೂರ್ಣಗೊಳಿಸಲು ಬಿ.ಬಿ.ಎಂ.ಪಿ ಆಯವ್ಯಯದ ಬೆಂಗಳೂರು ಜಿಲ್ಲಾ ಉಸ್ತುವಾರಿ ಸಚಿವರ ಅನುದಾನದಡಿಯಲ್ಲಿ ಕಾಮಗಾರಿಗಳನ್ನು ಕೈಗೊಳ್ಳಲು ನಿಯಮಾನುಸಾರ |
| ಈ | ಯಾವ ಕಾಲಮಿತಿಯಲ್ಲಿ ಸದರಿ ಸಮಸ್ಯೆಗಳನ್ನು ಬಗೆಹರಿಸಲಾಗುವುದು? | ಕ್ರಮವಹಿಸಲಾಗುತ್ತಿದ್ದು, 3 ತಿಂಗಳ ಒಳಗಾಗಿ ಕೂರ್ಲಪ್ಪ ಬಡಾವಣೆಯ ಎಲ್ಲಾ ರಸ್ತೆಗಳನ್ನು ಅಭಿವೃದ್ಧಿಪಡಿಸಲು ಕ್ರಮ ವಹಿಸಲಾಗುತ್ತಿದೆ.<br><br>ಕುಡಿಯುವ ನೀರಿಗೆ ಸಂಬಂಧಿಸಿದಂತೆ ಬಡಾವಣೆಯ ಎಲ್ಲಾ ಮನೆಯ ಮಾಲೀಕರು ಜಲಮಂಡಳಿಗೆ ನೀರು ಹಾಗೂ |

| | | |
|---|---|---|
| | | ಒಳಚರಂಡಿ ಸಂಪರ್ಕಕ್ಕಾಗಿ ಅರ್ಜಿ ಸಲ್ಲಿಸಿ ನಿಯಮಾನುಸಾರ ಮಂಡಳಿಗೆ ಸಲ್ಲಬೇಕಾದ ಮೊತ್ತವನ್ನು ಪಾವತಿಸಿದ ನಂತರ ಮಂಜೂರು ಮಾಡಿ ನೀರು ಸರಬರಾಜು ಮಾಡಲಾಗುತ್ತದೆ. |

**ಸಂಖ್ಯೆ: ನಅಇ 259 ಎಂಎಸ್‌ವೈ 2021 (ಇ)**

(ಬಸವರಾಜ ಬೊಮ್ಮಾಯಿ)
ಮುಖ್ಯಮಂತ್ರಿ